# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಸದಸ್ಯರ ಹೆಸರು | ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1648 (1896) |
| ಉತ್ತರಿಸಬೇಕಾದ ದಿನಾಂಕ | 23.03.2021 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಯಾವ ಯಾವ ಸ್ಥಳೀಯ ಸಂಸ್ಥೆಗಳಲ್ಲಿ ಯುಜಿಡಿ ಕಾಮಗಾರಿಯನ್ನು ಪ್ರಾರಂಭಿಸಲಾಗಿರುತ್ತದೆ; ಅವುಗಳ ಅಂದಾಜು ಮೊತ್ತವೆಷ್ಟು; (ಸ್ಥಳೀಯ ಸಂಸ್ಥೆವಾರು ಮಾಹಿತಿಯನ್ನು ಒದಗಿಸುವುದು) | ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಕೈಗೊಂಡಿರುವ ಒಳಚರಂಡಿ ಕಾಮಗಾರಿಗಳ ಮಾಹಿತಿಯನ್ನು **ಅನುಬಂಧ 1** ರಲ್ಲಿ ಒದಗಿಸಲಾಗಿದೆ.<br><br>ಕೆ.ಯು.ಐ.ಡಿ.ಎಫ್.ಸಿ ವತಿಯಿಂದ ಏಷ್ಯಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮದಡಿ (ಎನ್‌ಕೆಯುಎಸ್‌ಐಪಿ) 14 ಜಿಲ್ಲೆಗಳಲ್ಲಿ 15 ನಗರ / ಪಟ್ಟಣಗಳಲ್ಲಿ ಯು.ಜಿ.ಡಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ. ಅವುಗಳ ಅಂದಾಜು ಮೊತ್ತ ಹಾಗೂ ಪ್ರಗತಿಯ ವಿವರವನ್ನು **ಅನುಬಂಧ-2** ರಲ್ಲಿ ಒದಗಿಸಲಾಗಿದೆ.<br><br>ಏಷ್ಯನ್ ಅಭಿವೃದ್ಧಿ ಬ್ಯಾಂಕ್ (ಎಡಿಬಿ) ನೆರವಿನ ಕರ್ನಾಟಕ ಸಮಗ್ರ ನಗರ ನೀರು ನಿರ್ವಹಣೆ ಹೂಡಿಕೆ (ಕ್ವಿಮಿಪ್) ಕಾರ್ಯಕ್ರಮ ಹಾಗೂ ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ರಾಜ್ಯದ ಆಯ್ದ ನಾಲ್ಕು (4) ಸ್ಥಳೀಯ ಸಂಸ್ಥೆಗಳಲ್ಲಿ ಒಳಚರಂಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಸ್ಥಳೀಯ ಸಂಸ್ಥೆವಾರು ಮಾಹಿತಿಯನ್ನು **ಅನುಬಂಧ-3** ರಲ್ಲಿ ಒದಗಿಸಲಾಗಿದೆ.<br><br>ವಿಶ್ವ ಬ್ಯಾಂಕ್ ನೆರವಿನ ಕರ್ನಾಟಕ ಪೌರ ಸುಧಾರಣ ಯೋಜನೆಯ" (ಕೆಎಮ್‌ಆರ್‌ಪಿ) ಪೌರಬಂಡವಾಳ ಹೂಡಿಕೆ ಘಟಕದಡಿ ರಾಜ್ಯದ ಆಯ್ದ ಎಂಟು (8) ನಗರಸಭೆ/ ಪುರಸಭೆಗಳಲ್ಲಿ ಒಳಚರಂಡಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿರುತ್ತದೆ. ಅದರಲ್ಲಿ ಏಳು ಕಾಮಗಾರಿಗಳನ್ನು ಪೂರ್ಣಗೊಳಿಸಿದ್ದು, ಒಂದು ಕಾಮಗಾರಿಯನ್ನು ರದ್ದುಗೊಳಿಸಲಾಗಿರುತ್ತದೆ. ಸ್ಥಳೀಯ ಸಂಸ್ಥೆವಾರು ಮಾಹಿತಿಯನ್ನು **ಅನುಬಂಧ-4** ರಲ್ಲಿ ಒದಗಿಸಲಾಗಿದೆ. |

| | | |
|---|---|---|
| ಆ) | ಉಡುಪಿ ಜಿಲ್ಲೆಯ ಕುಂದಾಪುರ ಪುರಸಭೆಗೆ ಯುಜಿಡಿ ಕಾಮಗಾರಿಯ ಡಿಪಿಆರ್ ಮತ್ತು ನಕ್ಷೆಯನ್ನು ತಯಾರಿಸಲಾಗಿದೆಯೇ: (ಪ್ರತಿಯನ್ನು ಒದಗಿಸುವುದು) ಈ ಯೋಜನೆಯ ಅಂದಾಜು ವೆಚ್ಚವೆಷ್ಟು? ಬಿಡುಗಡೆಯಾದ ಅನುದಾನವೆಷ್ಟು; ಬಿಡುಗಡೆಗೆ ಬಾಕಿಯಿರುವ ಅನುದಾನವೆಷ್ಟು; ಮೂಲ ಯೋಜನೆಗೆ ತಿದ್ದುಪಡಿಯನ್ನು ಮಾಡಲಾಗಿದೆಯೇ: ಹೌದಾದಲ್ಲಿ ಯಾವ ಕಾರಣಕ್ಕೆ ತಿದ್ದುಪಡಿ ತರಲಾಗಿದೆ: (ಸಂಪೂರ್ಣ ಮಾಹಿತಿಯನ್ನು ಒದಗಿಸುವುದು). | ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಕುಂದಾಪುರ ಪುರಸಭೆಗೆ ಯುಜಿಡಿ ಯೋಜನೆಯ ಡಿ.ಪಿ.ಆರ್ ಮತ್ತು ನಕ್ಷೆಯನ್ನು ತಯಾರಿಸಲಾಗಿದೆ **(ಅನುಬಂಧ 5 ರಲ್ಲಿ** ಒದಗಿಸಲಾಗಿದೆ.). ಈ ಯೋಜನೆಯ ಅಂದಾಜು ವೆಚ್ಚ ರೂ.5654.15 ಲಕ್ಷಗಳು. (ಟೆಂಡರ್ ಪ್ರಿಮಿಯಂ ಸೇರಿದಂತೆ) ಬಿಡುಗಡೆಯಾದ ಅನುದಾನ ರೂ.5023.32 ಲಕ್ಷಗಳು. ಯೋಜನೆಯ ಮೂಲ ವಿನ್ಯಾಸದಂತೆ ಯಾವುದೇ ಪ್ರಮುಖ ಬದಲಾವಣೆ ಮಾಡಿರುವುದಿಲ್ಲ. ಯೋಜನೆಯಡಿ ಪ್ರಸ್ತಾಪಿಸಿರುವ 5 ವೆಟ್‌ವೆಲ್ ಗಳ ಪೈಕಿ 2 ವೆಟ್‌ವೆಲ್‌ಗಳ ನಿರ್ಮಾಣದ ಜಮೀನುಗಳಿಗೆ ಸ್ಥಳೀಯರು ತೀವ್ರ ವಿರೋಧ ವ್ಯಕ್ತಪಡಿಸಿರುವ ಹಿನ್ನಲೆಯಲ್ಲಿ ಹಾಗೂ ಸದರಿ ಘಟಕಗಳಿಗೆ ಬೇರೆ ಜಮೀನಿನ ಲಭ್ಯತೆ ಇರುವುದರಿಂದ ಸ್ಥಳಾಂತರಿಸಲಾಗಿರುತ್ತದೆ. |
| ಇ) | ಈ ಯುಜಿಡಿ ಕಾಮಗಾರಿಯ ಟೆಂಡರ್ ಅವಧಿ ಯಾವುದು: ಟೆಂಡರ್ ಪಡೆದ ಗುತ್ತಿಗೆದಾರರ. ಹೆಸರು ಮತ್ತು ವಿಳಾಸ ಯಾವುದು; ಕಾಮಗಾರಿಯನ್ನು ಯಾವಾಗ ಮುಕ್ತಾಯಗೊಳಿಸಲಾಗುವುದು: | **ಟೆಂಡರ್ ಅವಧಿ:** 24 ತಿಂಗಳುಗಳು<br><br>**ಗುತ್ತಿಗೆದಾರರ ವಿಳಾಸ:** ಮೆ॥ ಪಿ.ಸಿ ಸ್ನೇಹಲ್ ಕನ್‌ಸ್ಟ್ರಕ್ಷನ್ ಕಂ., 9ನೇ ಮಹಡಿ, ಸಿಟಿ ಸೆಂಟರ್, ಸಿ.ಜಿ. ರಸ್ತೆ, ನವರಂಗಪುರ, ಅಹಮದಾಬಾದ್.<br>ಅಗತ್ಯವಿರುವ ಎಲ್ಲಾ ಜಮೀನುಗಳನ್ನು ಮಂಡಳಿಗೆ ಹಸ್ತಾಂತರಿಸಿದ ನಂತರ ಕಾಮಗಾರಿಗಳನ್ನು ಕೈಗೊಂಡು ಒಂದು ವರ್ಷದೊಳಗಾಗಿ ಮುಕ್ತಾಯಗೊಳಿಸಲು ಕ್ರಮ ವಹಿಸಲಾಗುವುದು. |
| ಈ) | ಈ ಕಾಮಗಾರಿಗಾಗಿ ಕಾಂಕ್ರೀಟ್ ರಸ್ತೆಗಳ ಮಧ್ಯಭಾಗವನ್ನು ಕತ್ತರಿಸಿ ಕಾಮಗಾರಿ ನಿರ್ವಹಿಸುತ್ತಿದ್ದು, ನಂತರ ಅವುಗಳನ್ನು ಮರು ಕಾಂಕ್ರೀಟ್ ಮಾಡದೇ ಇರುವುದರಿಂದ ಜನ ಸಾಮಾನ್ಯರಿಗೆ | ಟೆಂಡರ್‌ನಲ್ಲಿ ರಸ್ತೆಗಳನ್ನು ಅಗೆದ ಅಗಲಕ್ಕೆ ಪುನರ್ ನಿರ್ಮಾಣ ಮಾಡಲು 31 ಕಿ.ಮೀ ಅನುವು ಮಾಡಲಾಗಿದ್ದು, 23 ಕಿ.ಮೀ ಅಗೆದ ಅಗಲಕ್ಕೆ ರಸ್ತೆಗಳನ್ನು ಮರು ಕಾಂಕ್ರೀಟೀಕರಣ, ಮರು ಡಾಂಬರೀಕರಣ ಮತ್ತು ಇಂಟರ್‌ಲಾಕ್ ಪೇವರ್ಸ್ ಕಾಮಗಾರಿಗಳನ್ನು ಕೈಗೊಂಡು ಪೂರ್ಣಗೊಳಿಸಲಾಗಿದೆ.<br>ಕಾಮಗಾರಿಯನ್ನು ಶೀಘ್ರವಾಗಿ ಮುಕ್ತಾಯಗೊಳಿಸಲು ಅಗತ್ಯವಿರುವ ಎಲ್ಲಾ ಜಮೀನುಗಳನ್ನು ಹಸ್ತಾಂತರಿಸಲು ಮುಖ್ಯಾಧಿಕಾರಿ, |

| | | |
|---|---|---|
| | ತೊಂದರೆಯಾಗುತ್ತಿರುವ ಬಗ್ಗೆ ಮಾಧ್ಯಮದಲ್ಲಿ ವರದಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಕಾಮಗಾರಿಯನ್ನು ಶೀಘ್ರವಾಗಿ ಮುಕ್ತಾಗೊಳಿಸುವ ಬಗ್ಗೆ ಕ್ರಮವೇನು? | ಕುಂದಾಪುರ ರವರಿಗೆ ಹಲವು ಬಾರಿ ಪತ್ರ ವ್ಯವಹಾರ ಮಾಡಲಾಗಿರುತ್ತದೆ. ದಿನಾಂಕ 18-02-2021 ರಂದು ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ನಡೆದ ಪ್ರಗತಿ ಪರಿಶೀಲನಾ ಸಭೆಯಲ್ಲಿ ಒಳಚರಂಡಿ ವ್ಯವಸ್ಥೆಗೆ ಸಂಬಂಧಪಟ್ಟ ಎಲ್ಲಾ ಜಮೀನುಗಳನ್ನು ಮಂಡಳಿಗೆ ಹಸ್ತಾಂತರಿಸಲು ಮುಖ್ಯಾಧಿಕಾರಿ, ಕುಂದಾಪುರ ರವರಿಗೆ ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ ರವರು ಸೂಚಿಸಿರುತ್ತಾರೆ.<br><br>ಸದರಿ ಯೋಜನೆಯಡಿ 4 ವೆಟ್‌ವೆಲ್‌ಗಳ ನಿರ್ಮಾಣಕ್ಕೆ ಸಿ.ಆರ್.ಝಡ್ ನಿಂದ ಮಾರ್ಚ್ -2020 ರಲ್ಲಿ ನಿರಾಕ್ಷೇಪಣಾ ಪತ್ರ ಪಡೆಯಲಾಗಿದೆ. ಆದರೆ, ಸದರಿ 4 ವೆಟ್ ವೆಲ್ ಗಳ ಜಾಗಗಳನ್ನು ಈವರೆಗೂ ಮಂಡಳಿಗೆ ಹಸ್ತಾಂತರವಾಗಿರುವುದಿಲ್ಲ. ಇನ್ನುಳಿದ 1 ವೆಟ್‌ವೆಲ್ ಹಾಗೂ ತ್ಯಾಜ್ಯ ನೀರು ಸಂಸ್ಕರಣಾ ಘಟಕಕ್ಕೆ ಗುರುತಿಸಲಾಗಿರುವ ಜಾಗಗಳನ್ನೂ ಸಹ ಹಸ್ತಾಂತರಿಸಬೇಕಾಗಿರುತ್ತದೆ.<br><br>ಸದರಿ ಜಾಗಗಳನ್ನು ಪುರಸಭೆ ವತಿಯಿಂದ ಮಂಡಳಿಗೆ ಹಸ್ತಾಂತರಿಸಿದ ನಂತರ ಕಾಮಗಾರಿಯನ್ನು ಕೈಗೊಂಡು ಒಂದು ವರ್ಷದೊಳಗಾಗಿ ಪೂರ್ಣಗೊಳಿಸಲಾಗುವುದು. |

ಸಂಖ್ಯೆ: ನಅಇ 87 ಯುಎಂಎಸ್ 2021

(ಬಿ.ಎ.ಬಸವರಾಜ)

ನಗರಾಭಿವೃದ್ಧಿ ಸಚಿವರು